

# ಕರ್ನಾಟಕ  ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1188 (1225)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಪಶುಸಂಗೋಪನೆ ಸಚಿವರು

ವಿಷಯ : ಪಶು ಸಂಗೋಪನೆ ಅಭಿವೃದ್ಧಿಗೆ ಘೋಷಿಸಿದ ಅನುದಾನದ ಬಗ್ಗೆ

(ಅ) 2019-20 ಹಾಗೂ 2020-21ನೇ ಸಾಲಿನಲ್ಲಿ ಕಾರವಾರ ಜಿಲ್ಲೆಯಲ್ಲಿ ಪಶು ಸಂಗೋಪನೆ ಅಭಿವೃದ್ಧಿಗೆ ಘೋಷಿಸಿದ ಹಣವೆಷ್ಟು; ಆ ಪೈಕಿ ಬಿಡುಗಡೆಯಾದ ಹಾಗೂ ಖರ್ಚಾದ ಹಣವೆಷ್ಟು ; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಆ) ಹಸು, ಹಂದಿ, ಕುರಿ, ಆಡು, ಮೊಲ ಸಾಕಾಣಿಕೆ ಮತ್ತು ಕುಕ್ಕುಟೋದ್ಯಮ ಇತ್ಯಾದಿಗಳಿಗೆ ಕಳೆದ ಎರಡು ವರ್ಷಗಳಲ್ಲಿ ಖರ್ಚಾದ ಹಣವೆಷ್ಟು ; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ಹಸು ಸತ್ತರೆ ಸಿಗುವ ಪರಿಹಾರ ಎಮ್ಮೆ ಸತ್ತರೆ ಸಿಗುವುದಿಲ್ಲ ಎನ್ನುವ ರಾಜ್ಯದ ಜಾನುವಾರು ಸಾಕುವವರ ಕೂಗು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು ;

(ಈ) ಗ್ರಾಮೀಣ ಪ್ರದೇಶದ ರೈತರಿಗೆ ಮತ್ತು ನಿರುದ್ಯೋಗಿ ಯುವಕರಿಗೆ ಪಶುಸಂಗೋಪನೆಯ ತರಬೇತಿ ಮತ್ತು ಸಹಾಯಧನ ಮುಂತಾದ ಪ್ರೋತ್ಸಾಹ ನೀಡುವ ಯೋಜನೆ ಸರ್ಕಾರದ ಮುಂದಿದೆಯೇ ? (ವಿವರ ನೀಡುವುದು)